**ಕರ್ನಾಟಕ ವಿಧಾನ ಪರಿಷತ್ತು**

**144 ನೇ ಅಧಿವೇಶನ 2021**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 42

ಮಾನ್ಯ ಸದಸ್ಯರ ಹೆಸರು : ಶ್ರೀ. ಎನ್.ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 15-09-2021

ಉತ್ತರಿಸುವ ಸಚಿವರು : ಮಾನ್ಯ ಲೋಕೋಪಯೋಗಿ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಲೋಕೋಪಯೋಗಿ ಇಲಾಖೆಯ ಟೋಲ್ ರಸ್ತೆಗಳ ನಿರ್ವಹಣೆ ಮಾಡುವುದಾದಲ್ಲಿ ಟೋಲ್ ಸಂಗ್ರಹವನ್ನು ಖಾಸಗಿ ಸಂಸ್ಥೆಗಳಿಗೆ ನೀಡಲು ಕಾರಣವೇನು; | 1) ಕೆಶಿಫ್/ಕೆ.ಆರ್.ಡಿ.ಸಿ.ಎಲ್ ರಸ್ತೆಗಳಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಲೋಇ118ಇಎಪಿ2016, ಬೆಂಗಳೂರು, ದಿನಾಂಕ:31-03-2017 ರಂತೆ ಕೆ.ಆರ್.ಡಿ.ಸಿ.ಎಲ್ ವತಿಯಿಂದ ರಸ್ತೆ ಬಳಕೆದಾರರ ಶುಲ್ಕವನ್ನು ಸಂಗಹಿಸಲು ಆದೇಶವಿರುತ್ತದೆ. ಸದರಿ ಆದೇಶದನ್ವಯ ಟೆಂಡರ್ ಮುಖೇನ ಸರ್ಕಾರದ ಪರವಾಗಿ ಟೋಲ್ ಸಂಗಹಣೆ ಮಾಡಲು ಗುತ್ತಿಗೆದಾರರನ್ನು ನೇಮಿಸಲಾಗಿರುತ್ತದೆ. ಟೆಂಡರ್ ಕರಾರಿನಂತೆ ವಾರ್ಷಿಕ ಟೋಲ್ ಸಂದಾಯ ಮೊತ್ತಕ್ಕೆ ಅನುಗುಣವಾಗಿ ಪ್ರತಿ ವಾರವು ಗುತ್ತಿಗೆದಾರರು ನಿಗಮಕ್ಕೆ ಪಾವತಿಸಬೇಕಾಗಿರುತ್ತದೆ.<br>2) ಕೆಲವು ರಸ್ತೆಗಳನ್ನು ಕೆ.ಆರ್.ಡಿ.ಸಿ.ಎಲ್ ವತಿಯಿಂದ ಸಾರ್ವಜನಿಕ ಖಾಸಗಿ ಸಹಭಾಹಿತ್ವದಡಿ ವಿ.ಜಿ.ಎಫ್ (ಟೋಲ್) ಆಧಾರದ ಮೇಲೆ ಕೈಗೆತ್ತಿಕೊಂಡಿದ್ದು, ರಿಯಾಯಿತಿದಾರರು ಯೋಜನೆಯ ಶೇ.60 ರಷ್ಟು ಮೊತ್ತವನ್ನು ಹೂಡಿಕೆ ಮಾಡಿ, ಹೂಡಿಕೆಗೆ ಪ್ರತಿಯಾಗಿ ರಿಯಾಯಿತಿ ಅವಧಿಯವರೆಗೆ ಸದರಿ ರಸ್ತೆಗಳಲ್ಲಿ ಟೋಲ್ ಸಂಗಹಿಸಲು ಅವಕಾಶವಿರುತ್ತದೆ. |
| ಆ) | ಖಾಸಗಿ ಸಂಸ್ಥೆಗಳು ಸಂಗ್ರಹಿಸುವ ಟೋಲ್‌ಗಳಿಂದ ಸಂಬಂಧಿತ ರಸ್ತೆಗಳ ಅಭಿವೃದ್ಧಿ ಮತ್ತು ನಿರ್ವಹಣೆ ಸಾಧ್ಯವಾಗದಿದ್ದರೆ ಸದರಿ ಖಾಸಗಿ ಸಂಸ್ಥೆಗಳ ಟೋಲ್ ಸಂಗ್ರಹಿಸುವ ಗುತ್ತಿಗೆಯನ್ನು ರದ್ದು ಮಾಡಲು ಯಾವ ಕ್ರಮಗಳನ್ನು ಸರ್ಕಾರ ಕೈಗೊಂಡಿದೆ; | 1) ಕೆಶಿಫ್/ಕೆ.ಆರ್.ಡಿ.ಸಿ.ಎಲ್ ವತಿಯಿಂದ ಅಭಿವೃದ್ಧಿ ಪಡಿಸಲಾದ ರಸ್ತೆಗಳಲ್ಲಿ ಟೋಲ್ ಗುತ್ತಿಗೆ ಕರಾರಿನ ಅನ್ವಯ ರಸ್ತೆ ನಿರ್ವಹಣೆ ಮಾಡುವ ಯಾವುದೇ ನಿಬಂಧನೆಗಳು ಒಳಗೊಂಡಿರುವುದಿಲ್ಲ. ಕರಾರಿನ ಅನ್ವಯ ನಿಗಧಿತ ವಾರ್ಷಿಕ ಟೋಲ್ ಸಂದಾಯ ಮೊತ್ತವನ್ನು ಗುತ್ತಿಗೆದಾರರು ನಿಗಮಕ್ಕೆ ಪಾವತಿಸಬೇಕಾಗಿರುತ್ತದೆ. ಕೆ.ಆರ್.ಡಿ.ಸಿ.ಎಲ್ ವತಿಯಿಂದ ಟೋಲ್ ಆದಾಯವನ್ನು ಭದ್ರತೆಯಾಗಿರಿಸಿ ರಸ್ತೆ ಅಭಿವೃದ್ಧಿಗಾಗಿ ದೇಶೀಯ ಬ್ಯಾಂಕ್‌ಗಳಿಂದ ಪಡೆದ ಸಾಲವನ್ನು ಮರು ಪಾವತಿಸಲು ಟೋಲ್ ಆದಾಯವನ್ನು ಬಳಸಲಾಗುತ್ತಿದೆ.<br>2) ಸಾರ್ವಜನಿಕ ಖಾಸಗಿ ಸಹಭಾಗಿತ್ವದಡಿ VGF (Toll) Annuity, Co-finance (Hybrid Annuity) ಮಾದರಿಯಲ್ಲಿ ಅಭಿವೃದ್ಧಿ ಪಡಿಸಿ ಟೋಲ್ ವಿಧಿಸಲಾಗುತ್ತಿರುವ ರಸ್ತೆಗಳಲ್ಲಿ ರಿಯಾಯಿತಿ ಅವಧಿಯವರೆಗೆ ರಸ್ತೆ ನಿರ್ವಹಣೆಯನ್ನು ರಿಯಾಯಿದಾರರಿಂದ ನಿರ್ವಹಿಸಲಾಗುತ್ತಿದೆ. |
| ಇ) | ಟೋಲ್ ರಸ್ತೆಗಳ ನಿರ್ವಹಣೆಯನ್ನು ಲೋಕೋಪಯೋಗಿ ಇಲಾಖೆಯೇ ನಿರ್ವಹಿಸುತ್ತಿದ್ದರು ಖಾಸಗಿ ಸಂಸ್ಥೆಗಳಿಗೆ ಅದೇ ರಸ್ತೆಯಲ್ಲಿ ಟೋಲ್ ಸಂಗ್ರಹಿಸಲು ಅನುಮತಿ ನೀಡುವ ಮೂಲಕ ಜನಸಾಮಾನ್ಯರಿಗೆ ಸರ್ಕಾರ ವಂಚನೆ ಮಾಡಿದಂತಾಗಲಿಲ್ಲವೇ; ಒಂದೇ ವಿಷಯ ಮೇಲೆ ಎರಡು ಬಾರಿ ತೆರಿಗೆ ನೀಡಿದಂತಾಗಲಿಲ್ಲವೇ; ಈ ಕುರಿತು ಸರ್ಕಾರದ ನಿಲುವೇನು? | ಕೆಶಿಫ್/ಕೆ.ಆರ್.ಡಿ.ಸಿ.ಎಲ್ ವತಿಯಿಂದ ಅಭಿವೃದ್ಧಿ ಪಡಿಸಲಾದ ರಸ್ತೆಗಳಲ್ಲಿ ಟೋಲ್ ಗುತ್ತಿಗೆ ಕರಾರಿನ ಅನ್ವಯ ನಿಗಧಿತ ವಾರ್ಷಿಕ ಟೋಲ್ ಸಂದಾಯ ಮೊತ್ತವನ್ನು ಗುತ್ತಿಗೆದಾರರು ನಿಗಮಕ್ಕೆ ಪಾವತಿಸಬೇಕಾಗಿರುತ್ತದೆ. ಟೋಲ್ ರಸ್ತೆಗಳ ನಿರ್ವಹಣೆಯನ್ನು ಲೋಕೋಪಯೋಗಿ ಇಲಾಖೆ/ರಿಯಾಯಿತಿದಾರರು ನಿರ್ವಹಣೆ ಮಾಡುತ್ತಾರೆ.<br><br>ಲೋಕೋಪಯೋಗಿ ಇಲಾಖೆ ಅಧೀನ ಸಂಸ್ಥೆಗಳಾದ ಕೆ.ಆರ್.ಡಿ.ಸಿ.ಎಲ್/ ಕೆಶಿಫ್‌ನಿಂದ ಅಭಿವೃದ್ಧಿ ಪಡಿಸಲಾದ ರಸ್ತೆಗಳಲ್ಲಿ ಸರ್ಕಾರದ ಆದೇಶದಂತೆ ಟೋಲ್ ಸಂಗ್ರಹಣೆ ಮಾಡಲು ಮಾತ್ರ ಗುತ್ತಿಗೆದಾರರನ್ನು ನೇಮಿಸಲಾಗಿದ್ದು, ಕರಾರಿನಂತೆ ರಸ್ತೆ ನಿರ್ವಹಣೆಯು ಒಳಗೊಂಡಿರುವುದಿಲ್ಲ. |

ಸಂಖ್ಯೆ. ಲೋಇ E-250 ಇಎಪಿ 2021

(ಸಿ.ಸಿ. ಪಾಟೀಲ್)

**ಲೋಕೋಪಯೋಗಿ ಸಚಿವರು**